**ಗಣಪತಿಗೌಡ .ಎಸ್.***

# ಚಂದಾವರ ಕದಂಬ ವೀರ ಕಾವದೇವರಸನ ಕಬ್ರಿಗಿ ಶಾಸನ

ಕಬ್ರಿಗಿಯು ಕುಮಟಾ ತಾಲ್ಲೂಕಿನ ಕತಗಾಲ ಗ್ರಾಮಕ್ಕೆ ಸೇರಿದ ಉಪಗ್ರಾಮವಾಗಿದ್ದು ಕತಗಾಲದಿಂದ ಸುಮಾರು ೬ ಕಿ.ಮಿ. ದೂರದಲ್ಲಿದೆ. ಅಲ್ಲಿರುವ ವಿಷ್ಣು ದೇವಾಲಯದ ಬಲಪಾರ್ಶ್ವದಲ್ಲಿ ಈ ಶಾಸನವಿದೆ. ೨೫ ಸಾಲುಗಳಿರುವ ಈ ಶಾಸನವನ್ನು ಕ್ರಿ.ಶ. ೧೩ನೇ ಶತಮಾನದ ಕನ್ನಡ ಅಕ್ಷರಗಳಲ್ಲಿ ಕೊರೆದಿದ್ದು, ಮೇಲ್ಭಾಗದಲ್ಲಿ ಶಿವಲಿಂಗ ಮತ್ತು ಬಸವನ ಚಿತ್ರಗಳಿವೆ.

ಶಾಸನ ನೀಡುವ ಕಾಲವಿವರ ಇಂತಿದೆ : "ವೀರ ಕಾವದೇವ ವರುಷದ ೧೨ನೆಯ ವಿಶ್ವಾವಸು ಸಂವತ್ಸರದ ವಯಿಶಾಖ ಸುದ್ಧ ೩ ರವಿವಾರ". ಈ ವಿವರಗಳು ೧೩ನೆ ಶತಮಾನದಲ್ಲಿ ಕ್ರಿ.ಶ. ೧೨೪೫ ಎಪ್ರಿಲ್ ೨೯, ರವಿವಾರಕ್ಕೆ ಸರಿ ಹೊಂದುತ್ತದೆ.

**ಶಾಸನದ ಸಾರಾಂಶ ಹೀಗಿದೆ :**

ಶಿವಸ್ತುತಿಯಿಂದ ಪ್ರಾರಂಭಿಸಿ, ಚಂದ್ರಿಕಾಪುರ ನೆಲೆವೀಡನ್ನು ಪರಿಚಯಿಸುತ್ತದೆ. ಶ್ರೀ ವೀರಕಾವದೇವರಸರು ಮತ್ತು ಕೀರ್ತಿನಾರಾಯಣ ದಂಡನಾಯಕರು ಇಬ್ಬರೂ ಇದ್ದು ಕಬ್ಬರಗಿ ಗ್ರಾಮವನ್ನು ಶ್ರೀ ಮಹಾಬಳ ದೇವರಿಗೆ ಸರ್ವಬಾಧಾ ಪರಿಹಾರವಾಗಿ ಕೊಟ್ಟಿದ್ದನ್ನು ವಿವರಿಸುತ್ತದೆ. ಶಾಸನದಲ್ಲಿಯ ಮೊದಲ ೧೦ ಸಾಲುಗಳು ಆದಿಕದಂಬ ಮಯೂರವರ್ಮನ ವಂಶದ ಸ್ತುತಿ ನೀಡಿದರೆ ಉಳಿದ ೧೫ ಸಾಲುಗಳು ವೀರ ಕಾವದೇವನ ಸಹಿತ ಕೀರ್ತಿನಾರಾಯಣ ದಂಡನಾಯಕ ಹಾಗೂ ಗೋಕರ್ಣದ ತಳಾಧಿಕಾರಿ, ಧೂಳಿಖೇಡದ ಮಾದಯ್ಯ, ವೈದ್ಯರ ಹೆಬ್ಬಾರವ, ಬೆಣ್ಣೆಯ ಹೆಬ್ಬಾರವ, ಕೈದಾಡಿ ಹೆಬ್ಬಾರವ, ತೆಂಗಾಕ ಹೆಬ್ಬಾರವ, ಗಡಿಗಾರಿ ಹೆಬ್ಬಾರವ ಮೊದಲಾದವರ ಹೆಸರುಗಳನ್ನು ಹೇಳುತ್ತದೆ.

ಸುಮಾರು ೫ ದಶಕಗಳ ಹಿಂದೆಯೇ ಆರ್.ಎಸ್. ಪಂಚಮುಖಿಯವರು 'ಚಂದಾವರ ಕದಂಬರು' ಎಂಬ ಹೊಸ ಮನೆತನವನ್ನು ಪರಿಚಯಿಸಿ ಅವರ ವಂಶಾವಳಿಯನ್ನು ಕ್ರಿ.ಶ. ೧೦೭೮ ರಿಂದ ಪ್ರಾರಂಭಿಸಿದ್ದರು.[1] ಆದರೆ ಇತ್ತೀತ್ತಲಾಗಿ ದೊರೆತ ಕೆಲವು ಹೊಸಶಾಸನಗಳ ಆಧಾರದ ಮೇಲೆ ನಿಜವಾಗಿ ಚಂದಾವರ ಕದಂಬ ಮನೆತನದ ಇತಿಹಾಸ ಅರಸ ತ್ರಿಭುವನಮಲ್ಲ ಬೀರದೇವ/ವೀರದೇವನ ಕಾಲದಿಂದ ಪ್ರಾರಂಭವಾಗುತ್ತದೆಂದು ತಿಳಿದುಬಂದಿದೆ. ಇವನಿಗೆ ಸಂಬಂಧಪಟ್ಟ ಶಾಸನಗಳು ಕ್ರಮವಾಗಿ ಕ್ರಿ.ಶ. ೧೨೧೯ ಮತ್ತು ೧೨೨೩ರದ್ದಾಗಿದೆ[2].

---

* ಸಂಶೋಧನಾ ಸಹಾಯಕರು. ಪ್ರಾಚೀನ ಇತಿಹಾಸ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ—580003.

1. ಪಂಚಮುಖಿ. ಆರ್. ಎಸ್ : **ಪ್ರೊಗ್ರೆಸ್ ಆಫ್ ಕನ್ನಡ ರಿಸರ್ಚ್ ಇನ್ ಬಾಂಬೆ ಪ್ರೊವ್ಹಿಯನ್ಸಿ** (1941-46) ಭಾಗ 2. ಪು. 6-7. ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.
2. ಸಂಪತ್. ಎಂ. ಡಿ. : "ಚಂದಾವರ ಇನಸ್ಕ್ರಿಪ್ಷನ್ ಅಫ್ ಕದಂಬ ಬೀರದೇವರಸ" ಜರ್ನಲ್ ಆಫ್ ದಿ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಸಂಪುಟ 9 (ಧಾರವಾಡ) ಪು. 88-94

ಇದರಲ್ಲಿ ಇವರ ವಂಶಾವಳಿಯ ಕುರಿತ ಯಾವುದೇ ಪ್ರಸ್ತಾವನೇ ಇಲ್ಲ. ಆದರೆ ಬೀರದೇವನು ಚಂದ್ರಿಕಾ ಪುರದಲ್ಲಿ ಆಳುತ್ತಿದ್ದನೆಂದೂ, ಅವನ ಪ್ರಧಾನ ದಂಡ ನಾಯಕ ಕೀರ್ತಿನಾರಾಯಣನನ್ನು ಹೆಸರಿಸುತ್ತದೆ. ಆದರೆ ಗೋಕರ್ಣದ ವೀರಕಾವದೇವರಸನ ಕ್ರಿ.ಶ. ೧೨೫ರ ತಾಮ್ರ ಶಾಸನವು ವೀರದೇವನ ಮಗ ತೈಲ ನೆಂದೂ ಹಾಗೂ ಮೊಮ್ಮಗ ಕಾಮದೇವನೆಂದೂ ಹೇಳಿದೆ.[3] ಅದೇರೀತಿ ಕತಗಾಲದ ಹೈಸ್ಕೂಲಿನಲ್ಲಿರುವ ಕ್ರಿ.ಶ. ೧೨೫೬ರ ಶಾಸನವು ಕಾವದೇವನನ್ನು ಚಂದಾ ವರದಲ್ಲಿದ್ದ ವೀರದೇವನ ಮೊಮ್ಮಗ ಹಾಗೂ ಕಾದಂಬ ಸಂತಾನಂ ಹೈವೆಯ ಅಧಿಕಾರಿ ಎಂದು ಹೇಳಿದೆ.[4] ಇದಕ್ಕೂ ಪೂರ್ವದಲ್ಲಿ ಕ್ರಿ.ಶ. ೧೧೬೭ರ ಎಡತಾರೆಯ ಪಟ್ಟಣದ ತೈಲವರ್ಮನ ಶಾಸನವು ಕೂಡ ವೀರದೇವ, ಕಾವದೇವ ಹಾಗೂ ಕೀರ್ತಿನಾರಾಯಣ ದಂಡನಾಯಕ ನನ್ನು ಹೆಸರಿಸುತ್ತದೆ.[5] ಈ ಎಲ್ಲ ಶಾಸನಗಳ ಆಧಾರದ ಮೇಲೆ ಚಂದಾವರ ಕದಂಬರ ವಂಶಾವಳಿಯನ್ನು ಈ ಕೆಳಗಿನಂತೆ ಪುನರಚಿಸಬಹುದು.

ವೀರದೇವ/ ಬೀರದೇವ
|
ತೈಲ
|
ವೀರಕಾವದೇವ

**ಶಾಸನದ ಮಹತ್ವ**

೧. ಚಂದಾವರದ ಶಾಸನದಲ್ಲಿಯ ಬೀರದೇವನೂ, ಗೋಕರ್ಣ ತಾಮ್ರಶಾಸನ, ಕತಗಾಲ ಶಿಲಾ ಶಾಸನ ಮತ್ತು ಎಡತಾರೆಯಲ್ಲಿ ಬರುವ ವೀರ ದೇವನು ಒಬ್ಬನೆ ಎನ್ನುವುದು ಸ್ಪಷ್ಟವಾಗುವದು.

೨. ಪ್ರಸ್ತುತ ಶಾಸನ ಕ್ರಿ.ಶ. ೧೨೪೫ಕ್ಕೆ ಸರಿಹೊಂದು ವುದರಿಂದ ವೀರದೇವನ ಮೊಮ್ಮಗ ಕಾವದೇವನ ಆಳ್ವಿಕೆ ಕ್ರಿ.ಶ. ೧೨೩೪ ರಲ್ಲಿ ಆರಂಭವಾಯಿತೆಂಬು ದನ್ನು ಸ್ಪಷ್ಟಪಡಿಸುತ್ತದೆ.

೩. ಕೀರ್ತಿನಾರಾಯಣನು ಕ್ರಿ.ಶ. ೧೧೬೭ ರಿಂದ ಹಿಡಿದು ಮುಂದೆ ಬೀರದೇವ ಹಾಗೂ ಕಾವ ದೇವನ ೧೨ನೆಯ ವರ್ಷದವರೆಗೂ ಮಂತ್ರಿಯಾಗಿ ದ್ದನೆಂದು ತಿಳಿಸುತ್ತದೆ.

೪. ವಿಶಿಷ್ಟ ಹೆಬ್ಬಾರ ಮನೆತನಗಳ ಉಲ್ಲೇಖವಿರು ವುದು.

೫. ಕಬ್ಬರಗಿಯಲ್ಲಿ ಚಂದಾವರ ಕದಂಬರ ಕಾಲದ ದೇವಾಲಯವಿದ್ದ ಬಗ್ಗೆ ಮಾಹಿತಿ ನೀಡುತ್ತದೆ. ಈಗ ದೇವಾಲಯವನ್ನು ಆಧುನಿಕ ರೀತಿಯಲ್ಲಿ ಕಟ್ಟಲಾಗಿದೆ.

೬. ಶಾಸನದಲ್ಲಿ ಹೇಳಿದ ಕಬ್ಬರಗಿಯು ಇಂದಿನ ಕಬ್ರಗಿ ಯಾಗಿದೆ. ಆದರೆ ಧೂಳಿಖೇಡಯಾವುದೆಂದು ನಿರ್ಣಯಿಸಲಾಗಲಿಲ್ಲ.

**ಶಾಸನದ ಪಾಠ**

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ
ಚಾರವೇ ತ್ರೈಲೋಕ್ಯ ನಗರಾರಂಭ ಮೂಲ
ಸ್ತಂಭಾಯ ಸಂಭವೇ ||ಶಿವಂ||
೨. ಓಂ ನಮ ಶಿವಾಯ|| ಸ್ವಸ್ತಿ ಸಮಧಿಗತ ಪಂಚ
ಮಹಾಸಬ್ದ ಮಹಾಮಂಡಳೇಸ್ವರ ತ್ರೈಕ್ಷಾಕ್ಷ್ಮಸಂ
೩. ಭವ ಚತುರಾಶೀತಿ ನಗರಾವಿದಿಷ್ಟಿತ ಲಲಾಮ
ಲೋಚನ ಚತುರ್ಭುಜ ಜಗದ್ವಿತಿತಾಷ್ಟ
೪. ದಶಾಸ್ವಮೇಧಯಜ್ಞದೀಕ್ಷಾದೀಕ್ಷೀತ ಹಿಮವಂದು
ಗಿರೀಂದ್ರಮಂದ್ರ ಭುಜಗೇಂದ್ರ ಸಂಸ್ಥಾಪಿತ ಸಿ–
೫. ಲಾ ಸ್ತಂಭ[ಬ]ದ್ಧ ಮದಗಜ ಮಹಾಮಹಿಭಿ
ರಾಮಂ ಕಾದಂಬ ಚಕ್ರವರ್ತಿ ಮಯೂರವರ್ಮ
೬. ಕುಳಭೂಷಣ ಪೆರ್ಮ್ಮಟ್ಟಿತೂರ್ಯ್ಯ ನಿರ್ಘೋ
ಷಣ ಸಾಖಾಚರೇಂದ್ರ ಮಾರ್ಕ್ರೋಳುವರಗಂ-
೭. ಡ ಗಂಡಬಂಗಾಜ ಅಜ್ಜನಸಿಂಹ ಸಾಹಸೋ
ತ್ತುಂಗ ಸಹಜಮ್ರಿಗಮದಾಮೋದ ಶ್ರೀ ಗೋಕ-
೮. ರ್ಣ್ನ ಮಹಾಬಳ ದೇವರ ದಿಬ್ಯ ಶ್ರೀ ಪಾದ
ಪದ್ಮಾರಾಧಕ ಪಜಬಟ ಸಾಧಕಂ ಹುಸಿವರ ಸೂಲ
ಚಲದಂಕ ರಾ-

3. ಎಪಿಗ್ರಾಫಿಯಾ ಇಂಡಿಕಾ ಸಂಪುಟ. ಸಂಪುಟ-7, ಪುಟ 157-163.
4. ನಮ್ಮ ಗಮನಕ್ಕೆ ಬಂದ ಅಪ್ರಕಟಿತ ಶಿಲಾಶಾಸನ ಷಾಯಿಯಿಂದ ಅಚ್ಚು ಮಾಡಿದ್ದು.
5. ಅಪ್ರಕಟಿತ ಇನ್ನೊಂದು ಹೊಸ ಶಾಸನ.

೯. ಮ ನಿಗ[ಳಂ]ಕ ಮಲ್ಲ ಗಂಡರದಾವಣಿ ಪ್ರತಾಪ ವೀರ ಕಾವದೇವರಸರ ವಿಜಯರಾಜ್ಯಮುತ್ತರೋ ತ್ತರಾಭಿವೃದ್ಧಿ ಪ್ರವ-

೧೦. ರ್ದ್ಧ ಮಾನಮಾಚಂದ್ರಾರ್ಕತಾರಂಬರಂ || ಚಂದ್ರಿಕಾಪ್ಪುರದ ನೆಲೆವೀಡಿನೊಳು ಸುಖಸಂಕಥಾ ವಿನೋ-

೧೧. ದದಿಂ ರಾಜ್ಯಂಗೆಯುತ್ತಿರೆ || ಶ್ರೀ ಧಾರಣಿ ಪವಿತ್ರ ಮಾಡುದು ವಾರುಜ ಸಂಭವ ಶ್ರಿಷ್ಟಿಸಫಲಮುದಾ-

೧೨. ಯಿತು ಚಾರುಗುಣ ಮಂತ್ರಿಮಂಡಸ ನಾರಾ ಯಣನಿಂದವೆಂದೊಡೆನೊ ಮಹತ್ವಂ | ಗೋವಿಂದ ||

೧೩. ಶ್ರೀ ಸ್ವಸ್ತಿ ಶ್ರೀಮತು ವೀರಕಾವದೇವ ವರುಶದ [೧೨]ನೆಯ ವಿಶ್ವಾವಸು ಸಂವತ್ಸರದ ಪಯಶಾಖ ಸುಧ ೩ ರವಾರದಂ-

೧೪. ದು ಶ್ರೀ ಕಾವದೇವರಸರು ಶ್ರೀ ಕೀರ್ತಿ ನಾರಾ ಯಣ ದಂಣ್ಣಾಯಕರುಂ ವೊಂದಾ-

೧೫. ಗಿದ್ದು ಕಬ್ಬರಗೆಯ ಗ್ರಾಮಕ್ಕೆ ಕೊಟ್ಟ ಪತ್ರ ಶ್ರೀ ಮಹಾಬಲಿ ದೇವರಿಗೆ ಸರ್ವ್ವಬಾಧೆ

೧೬. ಪರಿಹವಾಗಿಯೂ ಗ್ರಾಮವ ಕೊಟ್ಟರು || ಶ್ರೀ ಮತು ವೀರಕಾವದೇವರಸರು ಶ್ರೀ ಕೀರ್ತಿನಾರಾ-

೧೭. ಯಣಯ ದಂಣ್ಣಾಯಕರು ಗೋಕರ್ಣ್ನದ ತ[ಳ] ಧಿಕಾರಿ ಧೂಳಿಖೇಡದ ಮಾದಯ್ಯನುಂ ವೈದ್ಯ-

೧೮. ರ ಹೆಬ್ಬಾರುವ ಮೊದಲಾಗಿ ಬೆಣ್ಣೆಯ ಹೆಬ್ಬಾರವ ಕೈಥಾಡಿ ಹೆಬ್ಬಾರವ

೧೯. ತೆಂಗಾಕ ಹೆಬ್ಬಾರುವ ಗಡಿಗಾರಿ ಹೆಬ್ಬಾರುವ ನಾಣೆ[ಲ್] ಹೆಬ್ಬಾರುವ ಯಿಂತಿ ನಾ-

೨೦. ಲ್ವರ ಮುಂದಿಟ್ಟು ಕಬ್ಬರಗೆಯ ಸಿದ್ಧಾಯ ವರ್ಸ ತಪ್ಪುದಂಡ ಬಡ್ಡಿಯಿಂತಿಸುವನೂ ಶ್ರೀ ಗೋ-

೨೧. ಕರ್ಣ್ನ ಮಹಾಬಲಿ[ದೇವರ್ಗ್ಗೆ]ಧಾರಪೂರ್ವ್ವಕಂ ಮಾಡಿಕೊಟ್ಟರು || ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ

೨೨. ಷಷ್ಠಿರ್ವ್ವರ್ಷ ಸಹಶ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ || ಆಕರಸ್ಯ ಕರಿ ಕರ್ತೃರ್ [.] ಕೋಟಿವರ್ಷ ಸ್ಥಿತ ನಕರಶ್ಚಪ

೨೩. ........ಗೋಕೋಟಿ ಫಲವಂಶ್ನಿತಿ || ದಾನಂವಾ ಪಾಲನೇಯೋ

೨೪. ದಾನಾಶ್ರೇಯೋನು ಪಾಲನಂ ದಾನಾಸ್ವರ್ಗ್ಗ

೨೫. ಗೇಯೋ... ....ನಾಡು.......ಮಲ್ಲ ||

ಕೃತಜ್ಞತೆಗಳು : ಲೇಖನವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ಸುಂದರರವರಿಗೂ, ಡಾ. ಎಸ್.ವಿ. ಪಾಡಿಗಾರರವರಿಗೂ ಕೃತಜ್ಞನಾಗಿದ್ದೇನೆ.